# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 572 (641)
2. ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
3. ಉತ್ತರಿಸುವ ದಿನಾಂಕ : 22.02.2022
4. ಉತ್ತರಿಸುವ ಸಚಿವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ದೇವನಹಳ್ಳಿ ತಾಲ್ಲೂಕಿನ ಪಾಳ್ಯ ಕೈಗಾರಿಕಾ ಪ್ರದೇಶದ ಯೋಜನೆಗೆ ಭೂಸ್ವಾಧೀನ ಪಡಿಸಿಕೊಂಡ ಚೆನ್ನರಾಯ ಪಟ್ಟಣ ಹೋಬಳಿಯ ಪೋಲನಹಳ್ಳಿಯ ಗ್ರಾಮದ ಸರ್ವೆ ನಂ. 34/2 ಮತ್ತು 33/2ರ ಜಮೀನಿನ ಖಾತೆದಾರರಲ್ಲಿನ ಒಬ್ಬರು ದಿನಾಂಕ: 13-09-2021 ರಲ್ಲಿ ವಿಶೇಷ ಭೂ ಸ್ವಾಧೀನ ಅಧಿಕಾರಿ-2 ರವರೆಗೆ ಭೂ ಪರಿಹಾರ ಪಾವತಿಸುವ ಸಂಬಂಧ ನೀಡಿರುವ ಮನವಿಯ ಮೇಲೆ ತೆಗೆದುಕೊಂಡ ಕ್ರಮವೇನು? | ಪಾಳ್ಯ ಕೈಗಾರಿಕಾ ಪ್ರದೇಶಕ್ಕಾಗಿ ಭೂಸ್ವಾಧೀನಪಡಿಸಿದ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ಚನ್ನರಾಯಪಟ್ಟಣ ಹೋಬಳಿ, ಪೋಲನಹಳ್ಳಿ ಗ್ರಾಮದ ಸರ್ವೆ ನಂ: 34/2 ಮತ್ತು 33/2 ರಲ್ಲಿ ಒಟ್ಟು 3-16 ಎಕರೆ ಜಮೀನಿನ ಅಧಿಸೂಚಿತ ಖಾತೆದಾರರ ವಿವರ ಈ ಕೆಳಕಂಡಂತಿದೆ :-<br>1. ಶ್ರೀ ವೈ.ಸಿ. ಶ್ರೀನಿವಾಸ್ ಬಿನ್ ಲೇಟ್ ಚಿಕ್ಕಬಚ್ಚಪ್ಪ<br>2. ಶ್ರೀ ವೈ.ಸಿ. ನಾರಾಯಣಸ್ವಾಮಿ ಬಿನ್ ಲೇಟ್ ಚಿಕ್ಕಬಚ್ಚಪ್ಪ<br>3. ಶ್ರೀ ವೈ.ಸಿ. ರಾಮಕೃಷ್ಣ ಬಿನ್ ಲೇಟ್ ಚಿಕ್ಕಬಚ್ಚಪ್ಪ<br>4. ಶ್ರೀ ವೈ.ಸಿ. ರಮೇಶ್ ಬಿನ್ ಲೇಟ್ ಚಿಕ್ಕಬಚ್ಚಪ್ಪ<br>5. ಶ್ರೀ ವೈ.ಸಿ. ಸುರೇಶ್ ಲೇಟ್ ಚಿಕ್ಕಬಚ್ಚಪ್ಪ<br>6. ಶ್ರೀ ರವೀಂದ್ರ ಬಿನ್ ಲೇಟ್ ಮರಿಯಪ್ಪ<br>7. ಶ್ರೀ ಕಿರಣ್ ಕುಮಾರ್ ಬಿನ್ ಲೇಟ್ ಮರಿಯಪ್ಪ<br>ಪ್ರಸ್ತಾವಿತ ಜಮೀನಿನ ಜಂಟಿ ಖಾತೆ ಶ್ರೀ ವೈ.ಸಿ. ಶ್ರೀನಿವಾಸ್ ಬಿನ್ ಲೇಟ್ ಚಿಕ್ಕಬಚ್ಚಪ್ಪ ಮತ್ತು ಇತರರ ಹೆಸರಿನಲ್ಲಿ ನಮೂದಾಗಿದ್ದು ಈ ಪೈಕಿ ಶ್ರೀ ವೈ.ಸಿ. ಶ್ರೀನಿವಾಸ್ ಬಿನ್ ಲೇಟ್ ಚಿಕ್ಕಬಚ್ಚಪ್ಪ ಇವರು ದಿನಾಂಕ: 12.01.2021 ರಂದು ಭೂಪರಿಹಾರ ಪಾವತಿಸುವಂತೆ ಕೋರಿ ವಿಶೇಷ ಭೂಸ್ವಾಧೀನಾಧಿಕಾರಿ-2, ಕೆ.ಐ.ಎ.ಡಿ.ಬಿ. ಇವರಿಗೆ ಮನವಿ ಸಲ್ಲಿಸಿ, ದಿನಾಂಕ: 20.03.2021 ರಂದು ನೋಟರಿ ಆಧಾರಿತ |
| (ಆ) | ಭೂ ಪರಿಹಾರ ವಂಚಿತ ಖಾತೆದಾರರಿಗೆ ಭೂ | |

| | | |
|---|---|---|
| | ಪರಿಹಾರ ಒದಗಿಸುವುದು ಯಾವಾಗ? ವಿಳಂಬಕ್ಕೆ ಕಾರಣಗಳೇನು? | ಪ್ರಮಾಣ ಪತ್ರವನ್ನು ಸಲ್ಲಿಸಿ, ತಮಗೆ ಮೇಲ್ಕಂಡ ಜಮೀನಿನ ಪರಿಹಾರ ಪಾವತಿಸಲು ಇತರ ಖಾತೆದಾರರು ಒಪ್ಪಿರುವುದಾಗಿ ತಿಳಿಸಿರುತ್ತಾರೆ.<br><br>ಈ ಕೋರಿಕೆಯನ್ನು ಪರಿಗಣಿಸಿ, ಪೋಲನಹಳ್ಳಿ ಗ್ರಾಮದ |
| (ಇ) | ಭೂ ಪರಿಹಾರ ಒದಗಿಸುವ ಖಾತೆದಾರರು ಒಬ್ಬರಿಗೆ ಮಾತ್ರ ಉದ್ದೇಶ ಪೂರ್ವಕವಾಗಿ ಅನಾನುಕೂಲ ಉಂಟು ಮಾಡುವ ವಿಷಯದಲ್ಲಿ ಸಂಬಂಧಪಟ್ಟ ಅದಿಕಾರಿಗಳ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದೇ : | ಸರ್ವೆ ನಂ: 33/2 ರ 2-26.8 ಎಕರೆ ಜಮೀನಿನ ಪರಿಹಾರ ಮೊತ್ತ ರೂ.2,92,87,500/-ಗಳನ್ನು ದಿನಾಂಕ: 26.03.2021 ರಂದು ಮತ್ತು ಸರ್ವೆ ನಂ: 34/2ರ 0-28 ಗುಂಟೆ ಜಮೀನಿನ ಪರಿಹಾರ ಮೊತ್ತ ರೂ.77,00,000/-ಗಳನ್ನು ದಿನಾಂಕ: 20.04.2021 ರಂದು ಆರ್.ಟಿ.ಜಿ.ಎಸ್. ಮುಖಾಂತರ ಶ್ರೀ ವೈ.ಸಿ. ಶ್ರೀನಿವಾಸ್ ಇವರಿಗೆ ವಿಶೇಷ ಭೂಸ್ವಾಧೀನಾಧಿಕಾರಿ-2, ಕೆ.ಐ.ಎ.ಡಿ.ಬಿ. ಇವರು ಪಾವತಿಸಿರುತ್ತಾರೆ.<br><br>ತದನಂತರ, ಸದರಿ ಜಮೀನಿನ ಪರಿಹಾರ ಪಾವತಿ ಬಗ್ಗೆ ಶ್ರೀ ರಮೇಶ್ ವೈ.ಸಿ. ಬಿನ್ ಲೇಟ್ ಚಿಕ್ಕಬಚ್ಚಪ್ಪ ಮತ್ತು ಸುರೇಶ್ ವೈ.ಸಿ. ಬಿನ್ ಚಿಕ್ಕಬಚ್ಚಪ್ಪ ಇವರು ಆಕ್ಷೇಪ ವ್ಯಕ್ತಪಡಿಸಿ, ದಿನಾಂಕ 09.06.2021 ಮತ್ತು 17.06.2021 ರಂದು ವಿಶೇಷ ಭೂಸ್ವಾಧೀನಾಧಿಕಾರಿ-2, ಕೆ.ಐ.ಎ.ಡಿ.ಬಿ. ಇವರಿಗೆ ಮನವಿ ಸಲ್ಲಿಸಿ, ತಮ್ಮ ಸಹಿಯನ್ನು ನಕಲು ಮಾಡಿ ಪರಿಹಾರವನ್ನು ಪಡೆದಿರುವುದಾಗಿ ತಿಳಿಸಿ, ತಮಗೆ ಹಾಗೂ ತಮ್ಮ ಸಹೋದರರಿಗೆ ಈ ಜಮೀನಿನಲ್ಲಿ ಸಮ ಭಾಗವಿದ್ದು ಅದರಂತೆ ಪರಿಹಾರವನ್ನು ಪಾವತಿಸುವಂತೆ ಕೋರಿರುತ್ತಾರೆ.<br><br>ವಿಶೇಷ ಭೂಸ್ವಾಧೀನಾಧಿಕಾರಿ-2, ಕೆ.ಐ.ಎ.ಡಿ.ಬಿ. ಇವರು ದಿನಾಂಕ: 17.06.2021 ರಂದು ಕ್ಲೇಮುದಾರರು ಮತ್ತು ದೂರುದಾರರಿಗೆ ನೋಟೀಸ್ ಜಾರಿ ಮಾಡಿ, ದಿನಾಂಕ 21.06.2021 ರಂದು ವಿಚಾರಣೆ ನಡೆಸಿದ ಸಂದರ್ಭದಲ್ಲಿ ಉಭಯತ್ರರರು ರಾಜಿ ಸಂಧಾನ ಮಾಡಿಕೊಂಡಿದ್ದು, ದಿನಾಂಕ 28.06.2021 ರಂದು ಇನ್ನು ಮುಂದೆ ಏನೇ ತಂಟೆ-ತಕರಾರುಗಳು ಬಂದಲ್ಲಿ ತಾವುಗಳೇ ಬಗೆಹರಿಸಿಕೊಳ್ಳುವುದಾಗಿ ಹಾಗೂ ಈ ಕುರಿತು ತಕರಾರು ಅರ್ಜಿ |

| | | |
|---|---|---|
| | | ಸಲ್ಲಿಸುವುದಾಗಲೀ, ಪೋಲೀಸ್ ಠಾಣೆಯಲ್ಲಿ ದೂರು ದಾಖಲಿಸುವುದಾಗಲೀ, ದಾವೆ ದಾಖಲು ಮಾಡುವುದಾಗಲೀ ಅಥವಾ ನ್ಯಾಯಾಲಯಗಳಲ್ಲಿ ಭಾಗಾಂಶಕ್ಕೆ ದಾವೆ ಹೂಡುವುದಾಗಲೀ ಮಾಡುವುದಿಲ್ಲವೆಂದು ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆಂದು ವಿಶೇಷ ಭೂಸ್ವಾಧೀನಾಧಿಕಾರಿ-2, ಕೆ.ಐ.ಎ.ಡಿ.ಬಿ. ಇವರು ವರದಿ ಮಾಡಿರುತ್ತಾರೆ.<br><br>ಈ ಮಧ್ಯೆ ಶ್ರೀ ಕಿರಣ್ ಕುಮಾರ್ ವೈ.ಎಂ. ಇವರ ಭಾಗಕ್ಕೆ ಬರಬೇಕಾದ ಹಣವನ್ನು ಪಾವತಿಸಿರುವುದಿಲ್ಲವೆಂದು ತಿಳಿಸಿ ಶ್ರೀ ಕಿರಣ್ ಕುಮಾರ್ ವೈ.ಎಂ. ಇವರು ದಿನಾಂಕ: 13.09.2021 ರಂದು ವಿಶೇಷ ಭೂಸ್ವಾಧೀನಾಧಿಕಾರಿ-2, ಕೆ.ಐ.ಎ.ಡಿ.ಬಿ. ಇವರಿಗೆ ತಕರಾರು ಅರ್ಜಿಯನ್ನು ಸಲ್ಲಿಸಿರುತ್ತಾರೆ.<br><br>ಈ ತಕರಾರಿನ ಬಗ್ಗೆ ವಿಶೇಷ ಭೂಸ್ವಾಧೀನಾಧಿಕಾರಿ-2, ಕೆ.ಐ.ಎ.ಡಿ.ಬಿ. ಇವರು ದಿನಾಂಕ: 28.01.2022 ರಂದು ಕ್ಲೇಮ್‌ದಾರರಾದ ಶ್ರೀ ವೈ.ಸಿ. ಶ್ರೀನಿವಾಸ್ ಇವರಿಗೆ ನೋಟೀಸ್ ನೀಡಿ, ತಾವು ಪಡೆದಿರುವ ಪರಿಹಾರದ ಮೊತ್ತದಲ್ಲಿ ತಮ್ಮ ಸಹೋದರರಾದ ಶ್ರೀ ಕಿರಣ್ ಕುಮಾರ್ ವೈ.ಎಂ. ಇವರಿಗೆ ಸೇರಬೇಕಾದ ಭಾಗಾಂಶ ಮೊತ್ತವನ್ನು ನೋಟೀಸ್ ತಲುಪಿದ ಏಳು ದಿನಗಳ ಒಳಗಾಗಿ ಪಾವತಿಸಿ ಮಾಹಿತಿ ನೀಡುವಂತೆ ಶ್ರೀ ವೈ.ಸಿ. ಶ್ರೀನಿವಾಸ್ ಬಿನ್ ಲೇಟ್ ಚಿಕ್ಕಬಚ್ಚಪ್ಪ ಇವರಿಗೆ ಸೂಚಿಸಿರುವುದಾಗಿ ವರದಿ ಮಾಡಿರುತ್ತಾರೆ.<br><br>ಈಗಾಗಲೇ ನೋಟೀಸ್ ಜಾರಿ ಮಾಡಿರುವುದರಿಂದ ನಿಯಮಾನುಸಾರ ಮುಂದಿನ ಕ್ರಮ ತೆಗೆದುಕೊಳ್ಳಲಾಗುತ್ತದೆ. |

ಸಂಖ್ಯೆ: ಸಿಐ 50 ಐಎಪಿ (ಇ) 2022

(ಡಾ॥ ಮುರುಗೇಶ ಆರ್. ನಿರಾಣಿ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು